# ಪೋಷಕರು ವಿಳಂಬಿಸದೆ ನೆರವು ಪಡೆಯಬೇಕು

## ಸೆರೆಬ್ರಲ್ ಪಾಲ್ಸಿ (ಮೆದುಳುವಾತ) ಹೊಂದಿರುವ ಮಗುವಿನ ಪೋಷಣೆ

ನೀತಾ ಮತ್ತು ನಿತಿನ್ ನಾಯಕ್

ನಿರ್ಮಿತ್ ಜುಲೈ 12, 2011ರಂದು ಜನಿಸಿದನು. ಜನನದ ವೇಳೆ ಆತನ ತೂಕ ಕೇವಲ 1.4 ಕೆ.ಜಿ ಇತ್ತು. ಇದನ್ನು ಕೇಳಿ ನಾವು ತುಂಬಾ ಆಘಾತಕ್ಕೆ ಒಳಗಾದೆವು. ಈ ವಿಷಯ ತಿಳಿದಾಗ ಇಡೀ ವಾರ ನಮಗೆ ನಿದ್ದೆ ಬರಲಿಲ್ಲ. ಸಾಕಷ್ಟು ಒತ್ತಡಕ್ಕೆ ಒಳಗಾಗಿ ಮುಂದಿನ ದಿನಗಳಲ್ಲಿ ಏನಾಗಬಹುದು ಎಂಬ ಭೀತಿ ಆವರಿಸಿತು. ಈ ರೋಗಲಕ್ಷಣದ ಕುರಿತು ನಮಗೆ ಸ್ಪಷ್ಟ ಮಾಹಿತಿ ನೀಡಲು ವೈದ್ಯರಿಗೂ ಸಹ ಆಗಲಿಲ್ಲ. ಆಸ್ಪತ್ರೆಯಲ್ಲಿ 20 ದಿನಗಳನ್ನು ಕಳೆದ ನಂತರ ನಾವು ನಿರ್ಮಿತ್‌ನನ್ನು ಮನೆಗೆ ಕರೆದುಕೊಂಡು ಬಂದೆವು. ನಾವು ಭವಿಷ್ಯದಲ್ಲಿ ಎದುರಿಸಬೇಕಾದ ಸಮಸ್ಯೆಗಳ ಕುರಿತು ನಮಗೆ ಯಾವುದೇ ಕಲ್ಪನೆ ಇರಲಿಲ್ಲ. ನಿರ್ಮಿತ್ ಸ್ವಲ್ಪ ದುರ್ಬಲನಾಗಿದ್ದಾನೆ ಎಂದಷ್ಟೇ ಭಾವಿಸಿದ್ದೆವು. ನಾವು ಅನೇಕ ವೈದ್ಯರನ್ನು ಭೇಟಿಯಾದೆವು. ಆದರೆ ಯಾವುದೇ ಸುಧಾರಣೆ ಕಂಡುಬರಲಿಲ್ಲ ಮತ್ತು ಬೆಳವಣಿಗೆಯ ಮೈಲಿಗಲ್ಲುಗಳನ್ನು ತಲುಪುವಲ್ಲಿ ಆತ ಹಿಂದೆ ಬಿದ್ದಿದ್ದ. ಹತ್ತು ತಿಂಗಳ ನಂತರ, ಹಮೀದಿಯಾ ಆಸ್ಪತ್ರೆಯ ಮಕ್ಕಳ ತಜ್ಞರಾಗಿರುವ ಡಾ. ಟಿಕ್ಕಾಸ್ ಅವರನ್ನು ಭೇಟಿಯಾದೆವು. ನಿರ್ಮಿತ್ ಸೆರೆಬ್ರಲ್ ಪಾಲ್ಸಿ (ಸಿ.ಪಿ–ಮೆದುಳುವಾತ)ಯಿಂದ ಬಳಲುತ್ತಿದ್ದಾನೆ ಮತ್ತು ಆತನಿಗೆ ವಿವಿಧ ರೀತಿಯ ಚಿಕಿತ್ಸೆಗಳು ಬೇಕು ಎಂದು ಅವರು ಹೇಳಿದರು. ನಮಗೆ ಸಿ.ಆರ್.ಸಿ.ಗೆ ಹೋಗುವಂತೆ ಅವರು ಸಲಹೆ ನೀಡಿದರು. ನಮ್ಮ ಮಗನ ಭವಿಷ್ಯದ ಕುರಿತು ನಿಜಕ್ಕೂಚಿಂತಿತರಾಗಿದ್ದೆವು. ಆದರೂ ನಮ್ಮ ಮನೆಯಿಂದ 15 ಕಿ.ಮೀ.ನಷ್ಟು ದೂರವಿರುವ ಸಿ.ಆರ್.ಸಿ.ಗೆ ಆತನನ್ನು ಕರೆದುಕೊಂಡು ಹೋಗಲು ನಾವು ಪ್ರಾರಂಭಿಸಿದೆವು. ಮನೆಯಲ್ಲೂ ಸಹ, ಚಿಕಿತ್ಸಾಕೇಂದ್ರದಲ್ಲಿ ಚಿಕಿತ್ಸಕರು ನೀಡುವ ವಿವಿಧ ಥೆರಪಿಗಳನ್ನು ನೀಡಲು ನಾವು ಪ್ರಾರಂಭಿಸಿದೆವು. ಆದರೆ ಯಾವುದೇ ಹೆಚ್ಚಿನ ಸುಧಾರಣೆ ಕಂಡು ಬರಲಿಲ್ಲ. ನಾವು ಸುಮಾರು ಮೂರು ವರ್ಷಗಳ ಕಾಲ ಆತನನ್ನು ಈ ಕೇಂದ್ರಕ್ಕೆ ಕರೆದುಕೊಂಡು ಹೋದೆವು.

ಈ ನಡುವೆ ನಾವು ಒಂದಷ್ಟು ಕೌಟುಂಬಿಕ ಸಮಸ್ಯೆಗಳನ್ನು ಎದುರಿಸಿದೆವು. ಹೀಗಾಗಿ ನಿರ್ಮಿತ್‌ಗೆ ಸರಿಯಾಗಿ ಗಮನ ನೀಡಲು ಆಗಲಿಲ್ಲ. ಆತನ ಬೆಳವಣಿಗೆ ಇನ್ನಷ್ಟು ಕುಂಠಿತಗೊಂಡಿತ್ತು. ಇದೇ ವೇಳೆ, ಡಾ. ಟಿಕ್ಕಾಸ್ ಅವರು ಔದ್ಯೋಗಿಕ ಚಿಕಿತ್ಸಕರಾಗಿರುವ (Occupational therapist) ಡಾ. ವಿಕಾಸ್ ಕದಂ ಅವರ ಕುರಿತು ನಮಗೆ ತಿಳಿಸಿದರು. ಇವರ ಥೆರಪಿಯು ನಿರ್ಮಿತ್‌ಗೆ ಕುಳಿತುಕೊಳ್ಳಲು ಮತ್ತು ನಡೆಯಲು ಸಹಾಯ ಮಾಡಿತು.

ನಾವು ಡಾ. ವಿಕಾಸ್ ಅವರ ಚಿಕಿತ್ಸೆಗಳನ್ನು ಮುಂದುವರಿಸಿದೆವು. ನಿರ್ಮಿತ್ ಮೂರೂವರೆ ವರ್ಷದವನಾಗಿದ್ದಾಗ ನಾವು ಆತನನ್ನು ಪ್ಲೇಸ್ಕೂಲ್ ಒಂದರಲ್ಲಿ ದಾಖಲು ಮಾಡಲು ಪ್ರಯತ್ನಿಸಿದೆವು. ಕೆಲವು ಶಾಲೆಗಳು ಆತನನ್ನು ದಾಖಲಿಸಲು ನಿರಾಕರಿಸಿದವು. ನಾವು ಅನೇಕ ಶಾಲೆಗಳಲ್ಲಿ ವಿಚಾರಿಸಿದೆವು. ಕೊನೆಗೆ ನಿರ್ಮಿತ್ 'ದ ಲರ್ನಿಂಗ್‌ಟ್ರೀ' ಎಂಬ ಶಾಲೆಯಲ್ಲಿ ಪ್ರವೇಶ ಪಡೆದನು. ಈ ಶಾಲೆಯ ಶಿಕ್ಷಕರು ತುಂಬಾ ಸಹಕಾರ ಮನೋಭಾವವುಳ್ಳವರಾಗಿದ್ದರು ಮತ್ತು ನಿರ್ಮಿತ್ ಅಲ್ಲಿ ಇತರ ಮಕ್ಕಳೊಡನೆ ಬೆರೆತು ಬದುಕಲು ಕಲಿತನು. ಆದರೆ ನಮ್ಮ ಸಮಸ್ಯೆ ಇಲ್ಲಿಗೆ ಕೊನೆಗೊಳ್ಳಲಿಲ್ಲ. ನಿರ್ಮಿತ್ ಒಂದಷ್ಟು ದೂರ ನಡೆಯಲು ಮಾತ್ರ ಸಮರ್ಥನಾಗಿದ್ದ. ಆದರೆ ಓದಲು ಮತ್ತು ಬರೆಯಲು ಆತನಿಗೆ ಸಾಧ್ಯವಾಗುತ್ತಿರಲಿಲ್ಲ. ಈ ಸಂದರ್ಭದಲ್ಲಿಯೇ ನಮಗೆ ಆತನನ್ನು ವಿಶೇಷ ಶಾಲೆಗೆ ಸೇರಿಸಬೇಕಾದ ಅಗತ್ಯ ಕಂಡುಬಂದಿತು. ಸ್ನೇಹಿತರು ಮತ್ತು ಪರಿಚಯದ ವ್ಯಕ್ತಿಗಳ ಮೂಲಕ ನಮಗೆ 'ಅರುಷಿ' ಎಂಬ ಸಂಸ್ಥೆಯ ಬಗ್ಗೆ ತಿಳಿಯಿತು. ಈ ಸಂಸ್ಥೆಯಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಥೆರಪಿಗಳು, ವಿಶೇಷ ಶಿಕ್ಷಣ ಮತ್ತು ಇತರ ವಿಧಾನಗಳ ಮೂಲಕ ತರಬೇತಿ ನೀಡಲಾಗುತ್ತಿತ್ತು. ಇದನ್ನು ತಿಳಿದು ನಾವು ಅಲ್ಲಿಗೆ ಹೋದೆವು. ಅವರು ನಮ್ಮ ಪರಿಸ್ಥಿತಿಯನ್ನು ಚೆನ್ನಾಗಿ ಅರಿತು ಕೊಂಡರು. ಹೀಗೆ ನಿರ್ಮಿತ್‌ನ ವಿಶೇಷ ಶಿಕ್ಷಣ ಪ್ರಾರಂಭವಾಯಿತು.

ಆತನ ಪರಿಸ್ಥಿತಿಯಲ್ಲಿ ನಿಧಾನವಾಗಿ ಸುಧಾರಣೆ ಕಂಡುಬಂದಿತು. ಆತನು ವಸ್ತುಗಳನ್ನು ಅರ್ಥಮಾಡಿಕೊಳ್ಳಲು ಮತ್ತು ಗುರುತಿಸಲು ಕಲಿತುಕೊಂಡನು. ನಿರ್ಮಿತ್‌ನ ಈ ಸುಧಾರಣೆಯನ್ನು ಕಂಡು ನಮಗೆ ಇನ್ನಷ್ಟು ಆತ್ಮವಿಶ್ವಾಸ ಹೆಚ್ಚಾಯಿತು. ಅರುಷಿಯಲ್ಲಿ ವಿಶೇಷ ಶಿಕ್ಷಕಿಯಾಗಿರುವ ರಮಾ ಮೇಡಂ ನಿರ್ಮಿತ್‌ಗೆ ಆತನ ಅಧ್ಯಯನದಲ್ಲಿ ಸಹಾಯ ಮಾಡಿದರು. ಅವರ ಪ್ರಯತ್ನದ ಫಲವಾಗಿ ನಿರ್ಮಿತ್ ಸ್ವಲ್ಪಮಟ್ಟಿಗೆ ಓದಲು ಮತ್ತು ಬರೆಯಲು ಪ್ರಾರಂಭಿಸಿದನು. ಈ ಸಂದರ್ಭದಲ್ಲಿ ನಾವು ಸ್ವಲ್ಪ ಆರ್ಥಿಕ ಸಮಸ್ಯೆಯನ್ನು ಎದುರಿಸಿದೆವು. ಹೀಗಾಗಿ ನಿರ್ಮಿತ್‌ನನ್ನು ಅರುಷಿಗೆ ಕಳುಹಿಸಲು ಕಷ್ಟವಾಯಿತು. ಆದರೆ ನಮಗೆ ಅರುಷಿಯ ಶಿಕ್ಷಕಿಯರಾದ ಸಪ್ನಾ ಮೇಡಂ ಹಾಗೂ ರಮಾ ಮೇಡಂ ಮತ್ತು ಇತರರ ಸಹಕಾರ ದೊರೆತು. ನಿರ್ಮಿತ್ ಮತ್ತೆ ಅಲ್ಲಿಗೆ ಹೋಗಲು ಪ್ರಾರಂಭಿಸಿದನು. ನಿರ್ಮಿತ್ ಈಗ ಕೇಂದ್ರೀಯ ವಿದ್ಯಾಲಯದಲ್ಲಿ ಕಲಿಯುತ್ತಿದ್ದಾನೆ. ಆತ ಅಲ್ಲಿ ಸಾಮಾನ್ಯ ವಿದ್ಯಾರ್ಥಿಗಳೊಂದಿಗೆ ಸಂಭಾಷಣೆ ನಡೆಸುತ್ತಾನೆ ಮತ್ತು ಅವರ ಜತೆಗೂಡಿ ಕಲಿಯುತ್ತಾನೆ. ಆದರೆ ಆತ ಅಲ್ಲಿಯೂ ಕೆಲವೊಂದು ಸಮಸ್ಯೆಗಳನ್ನು ಎದುರಿಸುತ್ತಿದ್ದನು. ಇತರ ಸಾಮಾನ್ಯ ಮಕ್ಕಳು ನಿರ್ಮಿತ್‌ನಿಂದ ಅಂತರ ಕಾಪಾಡಿಕೊಳ್ಳುತ್ತಿದ್ದರು ಮತ್ತು ಆತನನ್ನು ಅವರ ಜೊತೆ ಕುಳಿತುಕೊಳ್ಳಲು ಬಿಡುತ್ತಿರಲಿಲ್ಲ. ಈ ಸಮಸ್ಯೆಗಳ ನಡುವೆಯೂ ಕೆಲವೊಂದು ಒಳ್ಳೆಯ ವಿಚಾರಗಳು ಇದ್ದವು. ಹಲವು ಮಕ್ಕಳು ಆತನನ್ನು ಬೆಳಗ್ಗಿನ ಶಾಲಾ ಸಭೆಗೆ ಮತ್ತು ಶೌಚಾಲಯ ಇತ್ಯಾದಿ ಸ್ಥಳಗಳಿಗೆ ಕರೆದುಕೊಂಡು ಹೋಗುತ್ತಾರೆ. ಅವರು ಅವನಿಗೆ ಮನೆಕೆಲಸದ ಕುರಿತು ಹೇಳುತ್ತಾರೆ ಮತ್ತು ಅವನ ತರಗತಿ ಕೆಲಸವನ್ನು ನೋಟ್ ಪುಸ್ತಕದಲ್ಲಿ ಬರೆಸುತ್ತಾರೆ. ಅವರ ಬೆಂಬಲದಿಂದಾಗಿಯೇ ನಿರ್ಮಿತ್ ಯಾವುದೇ ಭೀತಿಯಿಲ್ಲದೆ ಶಾಲೆಗೆ ಹೋಗುತ್ತಾನೆ.

ಅರುಷಿಯ ಸಹಾಯದಿಂದಾಗಿಯೇ ನಿರ್ಮಿತ್ ಇಂದು ಇತರ ಮಕ್ಕಳ ಸಾಂಗತ್ಯದಲ್ಲಿ ಆತ್ಮವಿಶ್ವಾಸದಿಂದ ಮತ್ತು ಆರಾಮದಾಯಕವಾಗಿ ಬದುಕುತ್ತಿದ್ದಾನೆ. ಆತನು, ಆರುಷಿಯ ಮಕ್ಕಳು ನಡೆಸುವ ನಾಟಕಗಳಲ್ಲಿ ಆತ್ಮವಿಶ್ವಾಸದಿಂದ ಭಾಗವಹಿಸುತ್ತಾನೆ. ಈ ಕಾರಣಕ್ಕಾಗಿ ನಾವು ಅರುಷಿ ಮತ್ತು ಅಲ್ಲಿನ ಶಿಕ್ಷಕರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತೇವೆ. ನಿರ್ಮಿತ್‌ನ ಶಿಕ್ಷಣ ಮತ್ತು ಚಿಕಿತ್ಸೆಗಳ ಕಾರಣದಿಂದಾಗಿ ನಮ್ಮ ದಿನಚರಿ ಸಂಪೂರ್ಣವಾಗಿ ಬದಲಾಗಿದೆ. ಈ ಬದಲಾವಣೆಯಿಂದ ನಾವು ಬೇಗನೇ ಏಳುತ್ತೇವೆ, ಆತನನ್ನು ಶಾಲೆಗೆ ಬಿಡುತ್ತೇವೆ, ಬೆಳಗ್ಗೆ 11 ಗಂಟೆಗೆ ಆತನನ್ನು ಶಾಲೆಯಿಂದ ಕರೆದುಕೊಂಡು ಬಂದು ಅರುಷಿಯಲ್ಲಿ ಬಿಡುತ್ತೇವೆ, ಮತ್ತೆ ಅಲ್ಲಿಂದ ಮಧ್ಯಾಹ್ನ 1 ಗಂಟೆಗೆ ಮನೆಗೆ ಕರೆದುಕೊಂಡು ಬರುತ್ತೇವೆ, ಸಂಜೆ 5 ಗಂಟೆಗೆ ಆತನನ್ನು ಚಿಕಿತ್ಸಕರ ಬಳಿ ಕರೆದುಕೊಂಡು ಹೋಗುತ್ತೇವೆ ಹಾಗೂ ಕೊನೆಯದಾಗಿ ಆತ ಥೆರಪಿ ಮುಗಿಸಿ ಮನೆಗೆ ಬಂದಾಗ ಶಾಲಾ ಚಟುವಟಿಕೆಗಳ ಮನೆಕೆಲಸವನ್ನು ಮಾಡಿಸುತ್ತೇವೆ. ಆತನ ಬೆಳಗ್ಗಿನ, ಮಧ್ಯಾಹ್ನದ ಮತ್ತು ಸಂಜೆಯ ಆಹಾರದ ಬಗ್ಗೆಯೂ ನಾವು ಸಾಕಷ್ಟು ಕಾಳಜಿ ವಹಿಸುತ್ತೇವೆ ಮತ್ತು ಆತ ಆಟ ಆಡಲು ಸಮಯ ಒದಗಿಸುತ್ತೇವೆ. ನಾವಿಬ್ಬರೂ ಒಟ್ಟಿಗೆ ಈ ಎಲ್ಲಾ ಚಟುವಟಿಕೆಗಳನ್ನು ನಿರ್ವಹಿಸುತ್ತೇವೆ. ವಿಶೇಷ ಅಗತ್ಯವುಳ್ಳ ಮಕ್ಕಳ ಪೋಷಕರೊಂದಿಗೆ ನಾವು ಇನ್ನೊಂದು ಪ್ರಮುಖವಾದ ವಿಚಾರವನ್ನು ಹಂಚಿಕೊಳ್ಳಲು ಬಯಸುತ್ತೇವೆ. ಈ ಮಕ್ಕಳ ಭವಿಷ್ಯದ ಬಗ್ಗೆ ಅವರು ಹೆಚ್ಚು ಚಿಂತಿಸಬಾರದು. ಬದಲಾಗಿ ಅವರು ಮಕ್ಕಳ ಪ್ರಸ್ತುತ ಅಗತ್ಯತೆಗಳ ಕುರಿತು ಹೆಚ್ಚು ಗಮನ ಹರಿಸಬೇಕು, ಅವರ ಜೊತೆ ಹೆಚ್ಚು ಸಮಯ ಕಳೆಯಬೇಕು ಮತ್ತು ಅವರೊಂದಿಗೆ ಆಟವಾಡಬೇಕು ಹಾಗೂ ನಗುತ್ತಾ ಖುಷಿಯಲ್ಲಿರಬೇಕು. ಅವರ ದೌರ್ಬಲ್ಯದ ಕುರಿತು ಅವರಿಗೆ ತಿಳಿಸುವುದನ್ನು ಬಿಟ್ಟು ಅವರು ಮುಂದೆಸ್ವಾವಲಂಬಿ ಜೀವನ ನಡೆಸುವಂತೆ ಉತ್ತೇಜಿಸಬೇಕು. ಕೊನೆಯದಾಗಿ ನಮ್ಮನ್ನು ಕಾಡುವ ದೊಡ್ಡ ವಿಷಾದ ಏನೆಂದರೆ, ನಾವು ಸಕಾಲದಲ್ಲಿ ಸಮಸ್ಯೆಯ ಬಗ್ಗೆ ತಿಳಿದುಕೊಳ್ಳಲಿಲ್ಲ ಮತ್ತು ಇದಕ್ಕಿರುವ ಚಿಕಿತ್ಸೆಯ ಕುರಿತು ನಮಗೆ ಮಾಹಿತಿ ಸಿಗಲಿಲ್ಲ. ಹೀಗಾಗಿ ನಿರ್ಮಿತ್‌ನ ಚಿಕಿತ್ಸೆಯಲ್ಲಿ ವಿಳಂಬವಾಯಿತು. ಸಿ.ಪಿ.(ಮೆದುಳುವಾತ) ಇರುವ ಮಕ್ಕಳ ಪೋಷಕರಿಗೆ ಈ ನ್ಯೂನತೆಯ ಕುರಿತು, ಇದಕ್ಕಿರುವ ಚಿಕಿತ್ಸೆ, ಹೇಗೆ ಮತ್ತು ಏನು ಮಾಡಬೇಕು, ಇದರ ಚಿಕಿತ್ಸೆಗಾಗಿ ಎಲ್ಲಿಗೆ ಹೋಗಬೇಕು ಎಂಬ ಕುರಿತು ಸಂಪೂರ್ಣ ಮಾಹಿತಿಯನ್ನು ನೀಡಬೇಕೆಂದು ನಾವು ಎಲ್ಲಾ ವೈದ್ಯರು, ಪೋಷಕರು, ಶಿಕ್ಷಕರು ಮತ್ತು ಚಿಕಿತ್ಸಕ (ಥೆರಪಿಸ್ಟ್)ರಲ್ಲಿ ವಿನಂತಿಸುತ್ತೇವೆ. ಈ ನ್ಯೂನತೆಯ ಹಂತಗಳು ಮತ್ತು ಮಗು ಬೆಳೆದಂತೆ ಮಗುವಿನ ಮೇಲಾಗುವ ಪರಿಣಾಮ ಮುಂತಾದುವುಗಳ ಕುರಿತು ಪೋಷಕರಿಗೆ ಅರಿವು ಮೂಡಿಸಬೇಕು.

ಇದು ನಮ್ಮ ಮಕ್ಕಳಿಗೆ ಸಹಾಯ ಮಾಡಲು ಬೇಕಾಗಿರುವಂತಹ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಲು ನಮ್ಮನ್ನು ತಯಾರು ಮಾಡಿದ ಮತ್ತು ಈ ಮಕ್ಕಳಿಗಾಗಿ ಹೊಸ ಪ್ರಪಂಚವನ್ನೇ ಸೃಷ್ಟಿಸಿರುವ ಮತ್ತು ಅವರು ವಿವಿಧ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾಡಿರುವ ಹಾಗೂ ಅವರು ಮುಕ್ತವಾಗಿ ಬದುಕನ್ನು ಆನಂದಿಸುವಂತೆ ಮಾಡಿರುವ ಅರುಷಿ ಸಂಸ್ಥೆಗೆ ಧನ್ಯವಾದಗಳು.



* ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣ, ಆರೋಗ್ಯ, ಉದ್ಯೋಗ ಮತ್ತು ವೃತ್ತಿ ತರಬೇತಿ, ಸಂಶೋಧನೆ ಮತ್ತು ಮಾನವ ಸಂಪನ್ಮೂಲ ಅಭಿವೃದ್ಧಿ, ಪುನರ್ವಸತಿ ಮುಂತಾದ ನಿವಾರಕ ಮತ್ತು ಉತ್ತೇಜಕ ಅಂಶಗಳನ್ನು ಒದಗಿಸುವುದಕ್ಕಾಗಿ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯವು ಶ್ರೀನಗರ (ಜಮ್ಮು ಮತ್ತು ಕಾಶ್ಮೀರ), ಸುಂದರನಗರ (ಹಿಮಾಚಲ ಪ್ರದೇಶ), ಲಕ್ನೋ (ಉತ್ತರಪ್ರದೇಶ), ಭೋಪಾಲ (ಮಧ್ಯಪ್ರದೇಶ), ಗುವಾಹಟಿ (ಅಸ್ಸಾಂ), ಪಾಟ್ನಾ (ಬಿಹಾರ), ಅಹ್ಮದಾಬಾದ್ (ಗುಜರಾತ್) ಮತ್ತು ಕೋಯಿಕೋಡ್ (ಕೇರಳ) ಹೀಗೆ ಏಳು ಸ್ಥಳಗಳಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳಿಗಾಗಿ ಸಂಯುಕ್ತ ಪ್ರಾದೇಶಿಕ ಕೇಂದ್ರಗಳನ್ನು ಸ್ಥಾಪಿಸಿದೆ.



ಚಿತ್ರ ಶೀರ್ಷಿಕೆ:
**ನಿರ್ಮಿತ್ ನಾಯಕ್‌ನ**
ಪೋಷಕರಾದ ನೀತಾ ಮತ್ತು ನಿತಿನ್ ನಾಯಕ್

ಅನುವಾದ: **ಮೆಲ್ವಿನ್ ಮೆಂಡೊಂಕಾ** । ಪರಿಶೀಲನೆ: **ಲತಾ ಕೆ ಸಿ**